# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 798 (893)

ಸದಸ್ಯರ ಹೆಸರು : ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 20-09-2021

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1 | ಮಂಡ್ಯ ಜಿಲ್ಲೆಯಲ್ಲಿನ ಕೆ.ಆರ್.ಪೇಟೆ ತಾಲ್ಲೂಕಿನಲ್ಲಿ ಸಾಕು ಪ್ರಾಣಿಗಳ ಮೇಲೆ ಚಿರತೆಗಳು ದಾಳಿ ಮಾಡುತ್ತಿದ್ದು, ಸುತ್ತಮುತ್ತ ಹಳ್ಳಿಗಳಲ್ಲಿನ ಕರುಗಳ ಕಳೇಬರಗಳು ಕಂಡುಬರುತ್ತಿದ್ದು, ಇದರಿಂದ ಜನ ಭಯದಿಂದ ಜೀವನ ಸಾಗಿಸುವ ಪರಿಸ್ಥಿತಿ ಎದುರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಬಂದಿದೆ.<br>ಅರಣ್ಯದಂಚಿನ ಗ್ರಾಮಗಳಲ್ಲಿ ಚಿರತೆ ಹಾವಳಿಯನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಕಾಡಂಚಿನ ಗ್ರಾಮಗಳಲ್ಲಿ ವಾಸಿಸುವ ಜನರಿಗೆ ಜನ ಸಂಪರ್ಕ ಸಭೆಗಳ ಮೂಲಕ ವನ್ಯಪ್ರಾಣಿಗಳ ಬಗ್ಗೆ ಚಲನ-ವಲನಗಳ ಬಗ್ಗೆ ಅರಿವು ಮೂಡಿಸಿ ವನ್ಯಪ್ರಾಣಿಗಳು ಕಂಡು ಬಂದ ಕೂಡಲೇ ಸ್ಥಳೀಯ ಅರಣ್ಯ ಇಲಾಖಾ ಅಧಿಕಾರಿಗಳ ಸೂಚನೆಗೆ ತರಲು ಮುಂಜಾಗ್ರತಾ ಕ್ರಮ ವಹಿಸಲಾಗುತ್ತಿದೆ.<br>2. ಮಾನವ-ವನ್ಯಪ್ರಾಣಿ ಸಂಘರ್ಷ ಉಂಟಾಗುವ ಸಂದರ್ಭಗಳಲ್ಲಿ ಕೇಂದ್ರ ಸರ್ಕಾರದಿಂದ ಹೊರಡಿಸಿರುವ ಮಾರ್ಗಸೂಚಿಗಳನ್ವಯ ಕಡ್ಡಾಯವಾಗಿ ಕ್ರಮವಹಿಸಲು ಕ್ಷೇತ್ರಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಉದಾಹರಣೆಗೆ:- ಮಾನವ-ಚಿರತೆ ಸಂಘರ್ಷದ ಸಮಯದಲ್ಲಿ ಕೈಗೊಳ್ಳಬೇಕಾದ ಕ್ರಮಗಳನ್ನು ನಿರ್ದಿಷ್ಟವಾಗಿ ಕೇಂದ್ರ ಸರ್ಕಾರವು ತನ್ನ ಮಾರ್ಗಸೂಚಿಗಳಲ್ಲಿ ಹೊರಡಿಸಿದೆ.<br>1. ಮಾನವ-ಆವಾಸ ಸ್ಥಳಗಳಲ್ಲಿ ಸುತ್ತ ಬೆಳೆದಿರುವ ಕುರುಚಲು ಕಾಡನ್ನು ತೆರವುಗೊಳಿಸುವ ಮೂಲಕ ಚಿರತೆಗಳು ಗ್ರಾಮದೊಳಗೆ ನುಸುಳುವುದನ್ನು ತಡೆಯಬಹುದಾಗಿದೆ.<br>2. ಮಾನವ-ಚಿರತೆ ಸಂಘರ್ಷ ಹೆಚ್ಚಾಗಿ ಕಂಡುಬರುವ ಪ್ರದೇಶಗಳನ್ನು ಗುರುತಿಸಿ ಸೂಕ್ತ ಸ್ಥಳಗಳಲ್ಲಿ ಕ್ಯಾಮರಾ ಟ್ರ್ಯಾಪ್ ಗಳನ್ನು ಅಳವಡಿಸಿ, ಉಪಟಳ ನೀಡುತ್ತಿರುವ ಚಿರತೆಯನ್ನು ನಿರ್ದಿಷ್ಟವಾಗಿ ಗುರುತಿಸಿ ಮುಂದಿನ ಕ್ರಮ ಕೈಗೊಳ್ಳಲಾಗುತ್ತಿದೆ. |

....2

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 3. ಅಲ್ಲದೇ, ಚಿರತೆ ಹಾವಳಿ ಹೆಚ್ಚಾಗಿರುವ ವಿಭಾಗಗಳಲ್ಲಿ ಚಿರತೆಯನ್ನು ಸೆರೆ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರ ಉಪಕರಣಗಳನ್ನು ಅಗತ್ಯತೆ ಮೇರೆಗೆ ಸರಬರಾಜು ಮಾಡಲಾಗುತ್ತಿದೆ. |
| 2 | ರಾಜ್ಯದಾದ್ಯಂತ ವನ್ಯಮೃಗಗಳಿಂದ ಸಾವನ್ನಪ್ಪಿರುವ ಜನರ ಸಂಖ್ಯೆ ಎಷ್ಟು; ಅವರ ಕುಟುಂಬಗಳಿಗೆ ಸರ್ಕಾರ ಯಾವ ರೀತಿ ಸಹಾಯ ಮಾಡಿದೆ ಮತ್ತು ಇಂತಹ ಪ್ರಕರಣಗಳು ಮತ್ತೆ ಮರುಕಳಿಸದಿರಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಕಳೆದ 02 ವರ್ಷಗಳಲ್ಲಿ ವನ್ಯಪ್ರಾಣಿಗಳ ದಾಳಿಯಿಂದ ಉಂಟಾದ ಮಾನವ-ಪ್ರಾಣ ಹಾನಿ ಪ್ರಕರಣಗಳ ಜಿಲ್ಲಾವಾರು ವಿವರ ಮತ್ತು ಪಾವತಿಸಿದ ದಯಾತ್ಮಕ ಧನದ ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ.<br><br>ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಮಾನವ ಪ್ರಾಣ ಹಾನಿ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ ಎಫ್ಇಇ 143 ಎಫ್‌ಡಬ್ಲೂಎಲ್ 2010 ದಿನಾಂಕ: 03-08-2011ರನ್ವಯ ವನ್ಯಪ್ರಾಣಿಗಳ ದಾಳಿಯಿಂದ ಮೃತರಾದ ವ್ಯಕ್ತಿಯ ವಾರಸುದಾರರಿಗೆ ಪಾವತಿಸಲಾಗುತ್ತಿದ್ದ ರೂ 5,00,000/- ಧಯಾತ್ಮಕ ಧನವನ್ನು ಸರ್ಕಾರದ ಆದೇಶ ಸಂಖ್ಯೆ ಅಪಜೀ 66 ಎಫ್‌ಡಬ್ಲ್ಯೂಎಲ್ 2019 ದಿನಾಂಕ: 07-01-2020ರಲ್ಲಿ ರೂ. 7,50,000/- ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.<br><br>ಅಲ್ಲದೇ, ಸರ್ಕಾರಿ ಆದೇಶ ಸಂಖ್ಯೆ ಅಪಜೀ 61 ಎಫ್‌ಎಫಿ 2018 ದಿನಾಂಕ: 16-10-2018 ರಂತೆ ಮೃತರ ಕುಟುಂಬದ ವಾರಸುದಾರರಿಗೆ ಹಾಗೂ ಶಾಶ್ವತ ಅಂಗವಿಕಲತೆ ಪ್ರಕರಣಗಳಲ್ಲಿ ಸಂತ್ರಸ್ಥರಿಗೆ 05 ವರ್ಷಗಳವರೆಗೆ ಪ್ರತಿ ತಿಂಗಳಿಗೆ ರೂ. 2,000/- ಗಳ ಮಾಸಾಶನವನ್ನು ಸಹ ನೀಡಲಾಗುತ್ತಿದೆ.<br><br>ವನ್ಯಪ್ರಾಣಿಗಳು ನಗರ / ಪಟ್ಟಣದ ವಸತಿ ಪ್ರದೇಶಗಳಿಗೆ ಬರುವುದನ್ನು ತಡೆಯಲು ಇಲಾಖಾ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br>1. ರಾಜ್ಯದಲ್ಲಿರುವ ವನ್ಯಜೀವಿಗಳಿಗೆ ಸಂಪೂರ್ಣ ರಕ್ಷಣೆ ನೀಡುವ ಸಲುವಾಗಿ ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ, ಹುಲಿ ಮೀಸಲು ಅರಣ್ಯ, ಸಂರಕ್ಷಿತ ಮೀಸಲು ಅರಣ್ಯಗಳನ್ನು ಘೋಷಿಸಲಾಗಿರುತ್ತದೆ. |

....3

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 2. ಅರಣ್ಯ ಪ್ರದೇಶದಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು 2019-20ನೇ ಸಾಲಿನಿಂದ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತ ಹಂತವಾಗಿ ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ.<br><br>3. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ.<br>4. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ<br><br>5. ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ Rapid Response Teams (RRT) ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless Networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>6. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br><br>7. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವ ಗಾಯ ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ.<br><br>8. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗ್ಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 9. ಚಿರತೆ: ರಾಜ್ಯದಲ್ಲಿ ಚಿರತೆ ಹಾವಳಿ ತಡೆಗಟ್ಟಲು ಎಲ್ಲಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮುಂಜಾಗ್ರತಾ ಕ್ರಮವಾಗಿ ತಮ್ಮ ತಮ್ಮ ವಿಭಾಗಗಳಲ್ಲಿ 3-4 ಜನರನ್ನೊಳಗೊಂಡ ರಕ್ಷಣಾ ಪಡೆಯನ್ನು ರಚಿಸಿ ಹಾವಳಿ ಪ್ರದೇಶಗಳನ್ನು ಗುರುತಿಸಿ ಜನಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಹಾವಳಿ ಇರುವ ಕಡೆ ರಾತ್ರಿ ಗಸ್ತು ಮಾಡಲು ಮತ್ತು ಚಿರತೆ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರ ಉಪಕರಣಗಳನ್ನು ಸಿದ್ದತೆ ಮಾಡಿಕೊಂಡು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವಲಯ ಅರಣ್ಯಾಧಿಕಾರಿಗಳೊಂದಿಗೆ ಬೇಟಿ ನೀಡಿ ಸಾರ್ವಜನಿಕರಿಗೆ ತಿಳುವಳಿಕೆ ನೀಡುವುದಲ್ಲದೇ, ಅದರಲ್ಲೂ ಕಾಡಂಚಿನಲ್ಲಿ ವಾಸಿಸುವ ಜನರಿಗೆ ಹೆಚ್ಚಿನ ತಿಳುವಳಿಕೆ ನೀಡುವಂತೆ ರಾಜ್ಯದ ಎಲ್ಲಾ ಅರಣ್ಯ ಸಂರಕ್ಷಣಾಧಿಕರಿಗಳಿಗೆ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br><br>10. ಹುಲಿ: ರಾಜ್ಯದಲ್ಲಿ ಹುಲಿ ಹಾವಳಿ ಕಂಡುಬಂದಂತಹ ಸಂದರ್ಭದಲ್ಲಿ ಹಾವಳಿ ತಡೆಗಟ್ಟಲು ಅರಣ್ಯಾಧಿಕಾರಿಗಳಿಗೆ ಮುಂಜಾಗ್ರತಾ ಕ್ರಮವಾಗಿ ತಮ್ಮ ತಮ್ಮ ವಿಭಾಗಗಳಲ್ಲಿ 3-4 ಜನರನ್ನೊಳಗೊಂಡ ರಕ್ಷಣಾ ಪಡೆಯನ್ನು ರಚಿಸಿ ಹಾವಳಿ ಪ್ರದೇಶಗಳನ್ನು ಗುರುತಿಸಿ ಜನಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಹಾವಳಿ ಇರುವ ಕಡೆ ಹಗಲು-ರಾತ್ರಿ ಗಸ್ತು ಮಾಡಲು ಮತ್ತು ಹುಲಿ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರೆ ಉಪಕರಣಗಳನ್ನು ಸಿದ್ದತೆ ಮಾಡಿಕೊಂಡು ಸಂಬಂಧಪಟ್ಟ ಅರಣ್ಯಾಧಿಕಾರಿಗಳು ಸ್ಥಳಕ್ಕೆ ಬೇಟಿ ನೀಡಿ ಸಾರ್ವಜನಿಕರಿಗೆ ಅರಿವು ನೀಡುವುದಲ್ಲದೇ, ಅದರಲ್ಲೂ ಕಾಡಂಚಿನಲ್ಲಿ ವಾಸಿಸುವ ಜನರಿಗೆ ಹೆಚ್ಚಿನ ತಿಳುವಳಿಕೆ ನೀಡಲಾಗುತ್ತಿದೆ.<br><br>11. ಕರಡಿ: ರಾಜ್ಯದಲ್ಲಿ ಕರಡಿ ಹಾವಳಿ ಕಂಡು ಬಂದಂತಹ ಸಂದರ್ಭದಲ್ಲಿ ಕಳ್ಳಬೇಟೆ ತಡೆ ಶಿಬಿರ / ಕ್ಷಿಪ್ರ ತಡೆ ಶಿಬಿರದ ಸಿಬ್ಬಂದಿಯ ಮೂಲಕ ಕರಡಿಯನ್ನು ಹಿಮ್ಮೆಟ್ಟಿಸುವ ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ. |

| | | |
|---|---|---|
| 3 | ರಾಜ್ಯದಾದ್ಯಂತ ಎಷ್ಟು ಹಳ್ಳಿಗಳಲ್ಲಿ ಕ್ರೂರ ಮೃಗಗಳು ಸಾಕು ಪ್ರಾಣಿಗಳ ಮೇಲೆ ದಾಳಿ ಮಾಡಿರುವ ಪ್ರಕರಣಗಳು ದಾಖಲಾಗಿವೆ; ಇದರಿಂದ ಎಷ್ಟು ಕುಟುಂಬಗಳಿಗೆ ನಷ್ಟವಾಗಿದೆ; ಇದಕ್ಕೆ ಸರ್ಕಾರ ಯಾವ ರೀತಿ ನೆರವು ನೀಡಿದೆ? (ಮಾಹಿತಿ ನೀಡುವುದು) | ಕಳೆದ 02 ವರ್ಷದಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಸಾಕುಪ್ರಾಣಿ ಹತ್ಯೆ ಪ್ರಕರಣಗಳ ವಿವರ ಕೆಳಕಂಡಂತಿದೆ. |

| ಕ್ರ.ಸಂ | ವರ್ಷ | ಸಾಕುಪ್ರಾಣಿ ಹತ್ಯೆ ಪ್ರಕರಣಗಳು |
|---|---|---|
| 1 | 2019-20 | 2149 |
| 2 | 2020-21 | 3019 |
| 3 | 2021-22 (ಆಗಸ್ಟ್ 2021ರ ವರೆಗೆ) | 1280 |

ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಸಾಕುಪ್ರಾಣಿ ಹತ್ಯೆ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 109 ಎಫ್‌ಎಪಿ 2014, ದಿನಾಂಕ: 13.08.2014ರನ್ವಯ ಕುರಿ, ಮೇಕೆ ಮೃತಪಟ್ಟಲ್ಲಿ ರೂ.5,000/-ಗಳ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.

ವನ್ಯಪ್ರಾಣಿ ದಾಳಿಯಿಂದ ಹಸು, ಎತ್ತು, ಎಮ್ಮೆ ಮತ್ತು ಕೋಣ ಮೃತಪಟ್ಟಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 144 ಎಫ್ ಎಪಿ 2020, ದಿನಾಂಕ: 20.04.2021 ರನ್ವಯ ಎಸ್.ಡಿ.ಆರ್.ಎಫ್ (State disaster Response Fund) ರಲ್ಲಿನ ದರಗಳಂತೆ 2021-22 ನೇ ಸಾಲಿನಿಂದ ಜಾರಿಗೆ ಬರುವಂತೆ ರೂ.30,000/-ಗಳ ಗರಿಷ್ಠ ಮೊತ್ತದ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.

**ಸಂಖ್ಯೆ: ಅಪಜೀ 180 ಎಫ್‌ಡಬ್ಲ್ಯೂ ಎಲ್ 2021**

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು

FEE 180 FWL 2021

ಅನುಬಂಧ-1

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಂ.ನಾರಾಯಣಸ್ವಾಮಿ ಇವರ ಪ್ರಶ್ನೆ ಸಂಖ್ಯೆ: 893ಕ್ಕೆ ಉತ್ತರ

| ಕ್ರ. ಸಂ | ವಿಭಾಗ | ಮಾನವ ಪ್ರಾಣ ಹಾನಿ (ಮೊತ್ತ ರೂ.ಲಕ್ಷಗಳಲ್ಲಿ) | | | | | |
|---|---|---|---|---|---|---|---|
| | | 2019-20 | | 2020-21 | | 2021-22 (15-09-2021ರ ವರೆಗೆ) | |
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1. | ರಾಮನಗರ | 2 (ಆನೆ) | 10.00 | 2 (ಚಿರತೆ) | 15.00 | | |
| ಬೆಂಗಳೂರು ಗ್ರಾಮಾಂತರ ಜಿಲ್ಲೆ | | | | | | | |
| 2. | ಬೆಂಗಳೂರು ಗ್ರಾಮಾಂತರ | 1 (ಆನೆ) | 5.00 | – | – | | |
| 3. | ಬನ್ನೇರುಘಟ್ಟ ರಾ.ಉ | 1 (ಆನೆ) | 7.50 | 1 (ಆನೆ) | 7.50 | 02 (ಆನೆ) | 15.00 |
| | | | | | | | |
| 4. | ಕೋಲಾರ | 4 (ಆನೆ) | 30.00 | 3 (ಆನೆ) | 22.50 | 02 (ಆನೆ) | 15.00 |
| 5. | ಚಿಕ್ಕಬಳ್ಳಾಪುರ | – | – | – | – | | |
| 6. | ಬೆಳಗಾವಿ | – | – | – | – | | |
| 7. | ಬಾಗಲಕೋಟೆ | 1 (ಮೊಸಳೆ) | 5.00 | 1 (ಮೊಸಳೆ) | 7.50 | | |
| 8. | ಬಿಜಾಪುರ | – | – | 1 (ತೋಳ) | 7.50 | | |
| 9. | ಬಳ್ಳಾರಿ | 1 (ಕರಡಿ)<br>1 (ಮೊಸಳೆ) | 12.50 | – | – | – | – |
| 10. | ಚಿತ್ರದುರ್ಗ | 1 (ಕರಡಿ) | 5.00 | – | – | | |
| 11. | ದಾವಣಗೆರೆ | – | – | – | – | | |
| 12. | ಕೊಪ್ಪಳ | – | – | 2 (ಚಿರತೆ) | 15.00 | | |
| ಚಾಮರಾಜನಗರ ಜಿಲ್ಲೆ | | | | | | | |
| 13. | ಬಿ.ಆರ್.ಟಿ | 1 (ಆನೆ) | 5.00 | 2 (ಆನೆ) | 15.00 | | |
| 14. | ಕಾವೇರಿ | 1 (ಆನೆ) | 5.00 | 1 (ಆನೆ) | 7.50 | | |
| 15. | ಮಲೈ ಮಹದೇಶ್ವರ | 4 (ಆನೆ) | 20.00 | 1 (ಆನೆ) | 7.50 | | |
| 16. | ಬಂಡೀಪುರ | 3 (ಆನೆ)<br>2 (ಹುಲಿ) | 27.50 | 3 (ಆನೆ) | 22.50 | | |
| ಚಿಕ್ಕಮಗಳೂರು ಜಿಲ್ಲೆ | | | | | | | |
| 17. | ಚಿಕ್ಕಮಗಳೂರು | 2 (ಆನೆ)<br>1 (ಕಾಡುಹಂದಿ) | 15.00 | | | 01 (ಆನೆ) | 7.50 |
| 18. | ಭದ್ರಾ | – | – | | | – | – |
| 19. | ಕೊಪ್ಪ | 2 (ಕಾಡುಕೋಣ) | 12.50 | | | – | – |
| | | | | | | | |
| 20. | ಧಾರವಾಡ | – | – | – | – | – | – |
| 21. | ಗದಗ | – | – | – | – | – | – |
| 22. | ಹಾವೇರಿ | – | – | – | – | – | – |

......2

| | | | | | | | |
|---|---|---|---|---|---|---|---|
| 23. | ಬೀದರ್ | 1 (ಕರಡಿ) | 7.50 | | | – | – |
| 24. | ಕಲುಬರಗಿ | 1 (ಕಾಡುಹಂದಿ) | 5.00 | 1 (ಕಾಡುಹಂದಿ) | 7.50 | | |
| 25. | ರಾಯಚೂರು | 1 (ತೋಳ) | 7.50 | 2 (ಮೊಸಳೆ) | 15.00 | | |
| 26. | ಯಾದಗಿರಿ | 1 (ಮೊಸಳೆ) | 5.00 | 1 (ಮೊಸಳೆ) | 7.50 | – | – |
| | **ಹಾಸನ ಜಿಲ್ಲೆ** | | | | | | |
| 27. | ಹಾಸನ | 3 (ಆನೆ) | 15.00 | 5 (ಆನೆ) | 37.50 | 02 (ಆನೆ) | 15.00 |
| | **ತುಮಕೂರು ಜಿಲ್ಲೆ** | | | | | | |
| 28. | ತುಮಕೂರು | 1 (ಆನೆ)<br>4 (ಚಿರತೆ) | 32.50 | 2 (ಚಿರತೆ) | 15.00 | | |
| | **ಕೊಡಗು ಜಿಲ್ಲೆ** | | | | | | |
| 29. | ಮಡಿಕೇರಿ | 2 (ಆನೆ) | 12.50 | 4 (ಆನೆ) | 30.00 | 02 (ಆನೆ) | 15.00 |
| 30. | ವಿರಾಜಪೇಟೆ | 1 (ಆನೆ)<br>1 (ಕಾಡುಕೋಣ) | 12.50 | 3 (ಆನೆ)<br>3 (ಹುಲಿ) | 45.00 | 02 (ಆನೆ) | 15.00 |
| 31. | ಮಡಿಕೇರಿ ವಜೀ | 1 (ಆನೆ) | 5.00 | | | | |
| | **ಉಡುಪಿ ಜಿಲ್ಲೆ** | | | | | | |
| 32. | ಕುಂದಾಪುರ | 1 (ಜಿಂಕೆ)<br>2 (ಕಾಡುಕೋಣ) | 15.00 | | | – | – |
| 33. | ಮಂಡ್ಯ | – | – | | | – | – |
| | **ಮೈಸೂರು ಜಿಲ್ಲೆ** | | | | | | |
| 34. | ಮೈಸೂರು | 2 (ಆನೆ) | 12.50 | 1 (ಆನೆ) | 7.50 | | |
| 35. | ನಾಗರಹೊಳೆ | – | – | (1 ಹುಲಿ) | 7.50 | (1 ಹುಲಿ) | 7.50 |
| | **ಶಿವಮೊಗ್ಗ ಜಿಲ್ಲೆ** | | | | | | |
| 36. | ಭದ್ರಾವತಿ | | | 1 (ಕರಡಿ) | 7.50 | | |
| | ಒಟ್ಟು | 50 | 272.50 | 41 | 307.50 | 12 | 90.00 |